# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 95 |
| ಸದಸ್ಯರ ಹೆಸರು | ಶ್ರೀ ಎಸ್ ನಾಗರಾಜು (ಸಂದೇಶ್ ನಾಗರಾಜು) |
| ಉತ್ತರಿಸುವ ದಿನಾಂಕ | 15-09-2021 |
| ಉತ್ತರಿಸುವವರು | ಮಾನ್ಯ ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜನಗರದ ಸುಪ್ರಸಿದ್ಧ ಐತಿಹಾಸಿಕ ಚಾಮರಾಜೇಶ್ವರ ದೇವಾಲಯದ ರಥೋತ್ಸವವು ಕಳೆದ 5 ವರ್ಷಗಳಿಂದ ನಿಂತು ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ನೂತನ ರಥದ ನಿರ್ಮಣ ಯಾವ ಹಂತದಲ್ಲಿದೆ; ನಿರ್ಮಾಣ ಕಾರ್ಯವು ಯಾವ ಕಾಲಮಿತಿಯೊಳಗೆ ಮುಕ್ತಾಯಗೊಳ್ಳಲಿದೆ; | ಚಾಮರಾಜನಗರ ಐತಿಹಾಸಿಕ ಸುಪ್ರಸಿದ್ಧ ಶ್ರೀಚಾಮರಾಜೇಶ್ವರ ದೇವಾಲಯದ ರಥೋತ್ಸವವು ಕಳೆದ 5 ವರ್ಷಗಳಿಂದ ನಿಂತು ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಪ್ರಸ್ತುತ ಶ್ರೀ ಚಾಮರಾಜೇಶ್ವರ ದೇವಾಲಯದ ನೂತನ ರಥದ ನಿರ್ಮಾಣವು ಪೂರ್ಣಗೊಂಡಿದ್ದು, ಚಾಮರಾಜೇಶ್ವರ ದೇವಸ್ಥಾನದ ಆವರಣಕ್ಕೆ ಸ್ಥಳಾಂತರ ಮಾಡಬೇಕಾಗಿರುತ್ತದೆ. |
| ಆ) | ನೂತನ ರಥದ ನಿರ್ಮಾಣಕ್ಕೆ ಮಂಜೂರಾಗಿ ಬಿಡುಗಡೆ ಆಗಿರುವ ಅನುದಾನ ಎಷ್ಟು; ಇದುವರೆಗೆ ಖರ್ಚಾಗಿರುವ ಅನುದಾನ ಎಷ್ಟು; ರಥದ ನಿರ್ಮಾಣಕ್ಕೆ ಇನ್ನೂ ಹೆಚ್ಚಿನ ಅನುದಾನದ ಅಗತ್ಯ ಇದೆಯೇ? (ಮಾಹಿತಿಒದಗಿಸುವುದು) | ನೂತನ ರಥ ನಿರ್ಮಾಣಕ್ಕೆ ಸರ್ಕಾರದ ಆದೇಶ ಸಂಖ್ಯೆ: ಕಂಇ 116 ಮುಅಬಿ 2017 ದಿನಾಂಕ:04.08.2017ರಲ್ಲಿ ಚಾಮರಾಜನಗರ ಶ್ರೀಚಾಮರಾಜೇಶ್ವರ ದೇವಾಲಯದ ರಥದ ನಿರ್ಮಾಣಕ್ಕೆ ಹಾಗೂ ರಥದ ನಿಲುಗಡೆ ಕೊಠಡಿ ನಿರ್ಮಾಣಕ್ಕೆ ರೂ.120.00ಲಕ್ಷಗಳ ಅನುದಾನ ಮಂಜೂರಾಗಿರುತ್ತದೆ.<br><br>ಇದುವರೆಗೆ ರಥ ನಿರ್ಮಾಣಕ್ಕೆ ರೂ.96.00 ಲಕ್ಷಗಳ ಅನುದಾನ ಖರ್ಚಾಗಿದ್ದು, ರಥ ನಿರ್ಮಾಣಕ್ಕೆ **ರೂ.15,69,161/-ಗಳ** ಹೆಚ್ಚಿನ ಅನುದಾನ ಅವಶ್ಯಕತೆ ಇರುವುದಾಗಿ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರು ಕೋರಿದ್ದು, ಜಿಲ್ಲಾಧಿಕಾರಿಗಳ ಪ್ರಸ್ತಾವನೆ ಕುರಿತಂತೆ **ರೂ.120.00ಲಕ್ಷ** ಅನುಮೋದಿತ ಅಂದಾಜಿಗಿಂತ ಹೆಚ್ಚುವರಿಯಾಗಿರುವುದಕ್ಕೆ ಮೇಲಾಧಿಕಾರಿಗಳ ಪರಿವೀಕ್ಷಣಾ ಟಿಪ್ಪಣಿ, ಅನುಮೋದಿತ Work Slip EIRL ದಾಖಲೆಗಳು/ಮಾಹಿತಿಯನ್ನು ಸಲ್ಲಿಸಲು ಕೋರಿ ಧಾರ್ಮಿಕ ದತ್ತಿ ಆಯುಕ್ತರ ಕಛೇರಿಯಿಂದ ಜಿಲ್ಲಾಧಿಕಾರಿಗಳಿಗೆ ದಿನಾಂಕ:03-09-2021 ರಂದು ಪತ್ರ ಬರೆಯಲಾಗಿದ್ದು, ಜಿಲ್ಲಾಧಿಕಾರಿಗಳಿಂದ ವರದಿ/ಪ್ರಸ್ತಾವನೆ ನಿರೀಕ್ಷಿಸಲಾಗಿದೆ. |

ಸಂಖ್ಯೆ: ಕಂಇ 156 ಮುಸಪ್ರ 2021

(ಶಶಿಕಲಾ. ಅ. ಜೊಲ್ಲೆ)
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು